# ಕರ್ನಾಟಕ ವಿಧಾನ ಪರಿಷತ್ತು

1 ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1531
2 ಸದಸ್ಯರ ಹೆಸರು : ಡಾ॥ ಜೈಮಾಲ ರಾಮಚಂದ್ರ (ನಾಮ ನಿರ್ದೇಶನ ಹೊಂದಿದವರು)
3 ಉತ್ತರಿಸುವ ದಿನಾಂಕ : 19-03-2020
4 ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ನಗರದಲ್ಲಿರುವ ಒಟ್ಟು ರಾಜಕಾಲುವೆಗಳು ಎಷ್ಟು; | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಒಟ್ಟು 633 ರಾಜಕಾಲುವೆಗಳಿದ್ದು, ಇವುಗಳ ಉದ್ದವು ಸುಮಾರು 842 ಕಿ.ಮೀ ಗಳಾಗಿರುತ್ತದೆ. |
| ಆ) | ಈ ರಾಜಕಾಲುವೆಗೆ ಮಳೆ ನೀರುಗಾಲುವೆ ಮೇಲ್ಛಾವಣಿ ನಿರ್ಮಾಣ ಮಾಡಲಾಗಿದೆಯೇ; | 2017-18ರವರೆಗೂ ಆಯ್ದ ಭಾಗಗಳಲ್ಲಿ ರಾಜಕಾಲುವೆಗಳಿಗೆ ಮೇಲ್ಛಾವಣಿ ಹಾಕುವ ಕಾಮಗಾರಿಗಳನ್ನು ಕೈಗೊಳ್ಳಲಾಗಿರುತ್ತದೆ. ತದನಂತರ, Original Application No.454/2018 (M.A No.1092/2018), Dated:23.07.2018ರ ಆದೇಶದಲ್ಲಿ ಮಾನ್ಯ ಹಸಿರು ನ್ಯಾಯಾಧಿಕರಣ (National Green Tribunal)ದ ಆದೇಶದಂತೆ ರಾಜಕಾಲುವೆಗಳಿಗೆ ಆರ್.ಸಿ.ಸಿ ಮೇಲ್ಛಾವಣಿಯನ್ನು ಹಾಕುವ ಕಾಮಗಾರಿಯನ್ನು ನಿಷೇಧಿಸಿರುವ ಹಿನ್ನಲೆಯಲ್ಲಿ ಬಿಬಿಎಂಪಿ ವತಿಯಿಂದ ಆರ್.ಸಿ.ಸಿ ಮೇಲ್ಛಾವಣಿ ಹಾಕುವ ಕಾಮಗಾರಿಯನ್ನು ಕೈಬಿಡಲಾಗಿರುತ್ತದೆ. |
| ಇ) | 2016-17 ಮತ್ತು 2017-18ನೇ ಸಾಲಿನಲ್ಲಿ ಮುಖ್ಯಮಂತ್ರಿಗಳ ನಗರೋತ್ಥಾನ ಅನುದಾನದ ಅಡಿಯಲ್ಲಿ ಆರ್ ಎಂ ವಿ 2ನೇ ಹಂತ, ಡಾಲರ್ಸ್ ಕಾಲೋನಿಯಲ್ಲಿ ಪ್ರಾಯೋಗಿಕವಾಗಿ ನಿರ್ಮಿಸಿದ ಮಳೆ ನೀರುಗಾಲುವೆ ಮೇಲ್ಛಾವಣಿಯ ಮಾದರಿಯಲ್ಲಿ ಉಳಿದ ರಾಜಕಾಲುವೆಗಳಲ್ಲಿ ಇದೇ ರೀತಿಯ ಕಾಮಗಾರಿ ಮಾಡಲು ಸರ್ಕಾರ ಚಿಂತಿಸಿದೆಯೇ; | 2016-17 ಮತ್ತು 2017-18ನೇ ಸಾಲಿನಲ್ಲಿ ಮುಖ್ಯಮಂತ್ರಿಗಳ ನಗರೋತ್ಥಾನ ಅನುದಾನದ ಅಡಿಯಲ್ಲಿ ಆರ್ ಎಂ ವಿ 2ನೇ ಹಂತ, ಡಾಲರ್ಸ್ ಕಾಲೋನಿಯಲ್ಲಿ ಪ್ರಾಯೋಗಿಕವಾಗಿ 'ಉಕ್ಕಿನ ಚೌಕಟ್ಟುಗಳು ಮತ್ತು ಉಕ್ಕಿನ ತಗಡಿನಿಂದ" ಬೃಹತ್ ಮಳೆ ನೀರುಗಾಲುವೆಗೆ ಮೇಲ್ಛಾವಣಿಯನ್ನು ಹಾಕಲಾಗಿದ್ದು, ಸದರಿ ಮೇಲ್ಛಾವಣಿಯು ದುಬಾರಿಯಾಗಿದ್ದು, ಆಯ್ದ ಸ್ಥಳಗಳಲ್ಲಿ ಮಾತ್ರ ಈ ರೀತಿಯ ಮೇಲ್ಛಾವಣಿಯನ್ನು ನಿರ್ಮಿಸುವುದು ಸೂಕ್ತವೆಂದು ತೀರ್ಮಾನಿಸಲಾಗಿದೆ. ಉಳಿದ ರಾಜಕಾಲುವೆಗಳ ಮೇಲೆ ಇದೇ ರೀತಿಯ ಮೇಲ್ಛಾವಣಿಯನ್ನು ನಿರ್ಮಿಸುವ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |
| ಈ) | ಈ ಮಾದರಿಯ ಮೇಲ್ಛಾವಣಿಯಿಂದ ಸೊಳ್ಳೆಗಳ ನಿಯಂತ್ರಣ, ಪರಿಸರ ಮಾಲಿನ್ಯ, ಹೆಚ್ಚು ಮಳೆಯಾದಾಗ ಆಗುವ ಸಾವು ನೋವುಗಳು, ಡೆಂಗ್ಯೂ, ಮಲೇರಿಯಾ ದಂತಹ ಮಾರಕ ರೋಗಗಳಿಂದ ರಕ್ಷಣೆ ಪಡೆಯಬಹುದಲ್ಲವೇ? | ಹೌದು. ಬೃಹತ್ ಮಳೆ ನೀರುಗಾಲುವೆಗೆ ಮೇಲ್ಛಾವಣಿಯನ್ನು ಅಳವಡಿಸುವುದರಿಂದ ಸೊಳ್ಳೆಗಳ ನಿಯಂತ್ರಣ, ಪರಿಸರ ಮಾಲಿನ್ಯ, ಹೆಚ್ಚು ಮಳೆಯಾದಾಗ ಆಗುವ ಸಾವು ನೋವುಗಳು, ಡೆಂಗ್ಯೂ, ಮಲೇರಿಯಾದಂತಹ ಮಾರಕ ರೋಗಗಳಿಂದ ಸ್ವಲ್ಪ ಮಟ್ಟಿಗೆ ತಾತ್ಕಾಲಿಕವಾಗಿ ರಕ್ಷಣೆ ಪಡೆಯಬಹುದಾಗಿದೆ. |

**ಸಂಖ್ಯೆ: ನಅಇ 64 ಎಂಎನ್‌ವೈ 2020**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ